ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ಆರ್ಥಿಕ ಇಲಾಖೆಯ ಮಿತವ್ಯಯ ಆದೇಶ ಹಿಂಪಡೆಯುವ ಬಗ್ಗೆ

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ):-

339(448) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸರ್ಕಾರ ವಿವಿಧ ಇಲಾಖೆಗಳಡಿಯಲ್ಲಿ ವೇತನಾನುದಾಕ್ಕೆ ಒಳಪಡಿಸಲು ಮತ್ತು ಖಾಲಿ ಹುದ್ದೆಗಳನ್ನು ತುಂಬಲು ಸಾಕಷ್ಟು ಪ್ರಸ್ತಾವನೆಗಳು ಸ್ವೀಕೃತವಾಗಿರುವುದು ನಿಜವೇ;

(ಆ) ಒಂದೊಂದು ಪ್ರಸ್ತಾವನೆಯೂ ಒಂದೊಂದು ಕುಟುಂಬದ ಜೀವನವನ್ನು ಒಳಗೊಂಡಿದ್ದು, ಇಂತಹ ಪ್ರಸ್ತಾವನೆಗಳನ್ನು ಅನುದಾನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಸರ್ಕಾರವು ಸಂಖ್ಯೆ: ಆಇ/157/ವೆಚ್ಚ-8/2020, ದಿನಾಂಕ:10.06.2020 ರಂತೆ ಆರ್ಥಿಕ ಇಲಾಖೆಯಿಂದ ಸುತ್ತೋಲೆಯನ್ನು ಹೊರಡಿಸಿ ಈ ಪ್ರಸ್ತಾವನೆಗಳನ್ನು ವಿಲೆ ಇಟ್ಟಿರುವುದು ನಿಜವೇ;

(ಇ) ಈ ಆರ್ಥಿಕ ಇಲಾಖೆಯ ಸುತ್ತೋಲೆಯಿಂದ ಸಾವಿರಾರು ಕುಟುಂಬಗಳು ಬೀದಿಗೆ ಬೀಳುವ ಪರಿಸ್ಥಿತಿಗೆ ಬಂದಿದ್ದು, ಸರ್ಕಾರವು ಯಾವ ಕಾಲಮಿತಿಯೊಳಗೆ ಆರ್ಥಿಕ ಇಲಾಖೆಯ ``ಆರ್ಥಿಕ ಮಿತವ್ಯಯ'' ಸುತ್ತೋಲೆಯನ್ನು ಹಿಂಪಡೆಯಲಾಗುವುದು?